

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1276 (1424) |
| ಮಾನ್ಯ ಸದಸ್ಯರ ಹೆಸರು | ಶ್ರೀಮತಿ ಎಸ್. ವೀಣಾ ಅಚ್ಚಯ್ಯ |
| ಉತ್ತರಿಸಬೇಕಾದ ದಿನಾಂಕ | 23/09/2021 |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ, ಕಳೆದ ಎರಡು ವರ್ಷಗಳಿಂದ ಕೋವಿಡ್‌ನಿಂದಾಗಿ ಸಂಕಷ್ಟಕ್ಕೊಳಗಾಗಿರುವ ಎಷ್ಟು ಜನ ಕಾರ್ಮಿಕರಿಗೆ ಇಲಾಖೆ ಮೂಲಕ ಇದುವರೆಗೆ ನೆರವು ಒದಗಿಸಲಾಗಿದೆ; | **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ** ವತಿಯಿಂದ ಕೋವಿಡ್-19ರ ಒಂದನೇ ಮತ್ತು ಎರಡನೇ ಅಲೆಯಿಂದಾಗಿ ಸಂಕಷ್ಟಕ್ಕೊಳಗಾದ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಒಂದು ಬಾರಿ ಸಹಾಯ ಧನ ನೀಡಿರುವ ವಿವರ ಈ ಕೆಳಗಿನಂತಿದೆ:<br><br>ವರ್ಷ / ತಲಾ ನೋಂದಾಯಿತ ಫಲಾನುಭವಿಗಳಿಗೆ ವಿತರಿಸಿದ ಮೊತ್ತ (ರೂ. ಗಳಲ್ಲಿ) / ಸಹಾಯ ಧನ ಪಡೆದ ಫಲಾನುಭವಿಗಳ ಸಂಖ್ಯೆ:<br>2020-21 / ರೂ.5,000 / 1727<br>2021-22 / ರೂ.3,000 / 2482<br><br>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:-**<br>ರಾಜ್ಯ ಸರ್ಕಾರವು ಕೋವಿಡ್-19 ರಿಂದ ಸಂಕಷ್ಟಕ್ಕೊಳಗಾದ ಅಸಂಘಟಿತ ಕಾರ್ಮಿಕರಿಗೆ ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ ಮೂಲಕ ಪರಿಹಾರ ವಿತರಿಸಲು ಕ್ರಮ ಕೈಗೊಂಡಿದ್ದು ಕೊಡಗು ಜಿಲ್ಲೆಗೆ ಸಂಬಂಧಿಸಿದ ಮಾಹಿತಿ ಈ ಕೆಳಕಂಡಂತಿದೆ.<br>**ಕೋವಿಡ್-19ರ ವಿಶೇಷ ಪ್ಯಾಕೇಜ್:-**<br>➢ ಕೋವಿಡ್-19ರ 2020ನೇ ವರ್ಷದ ಮೊದಲನೆ ಅಲೆಯ ಲಾಕ್‌ಡೌನ್ ಕಾರಣ ಸಂಕಷ್ಟಕ್ಕೊಳಗಾದ ಅಗಸ ಮತ್ತು ಕ್ಷೌರಿಕ ವೃತ್ತಿ ನಿರ್ವಹಿಸುತ್ತಿರುವ 1,41,602 ಅಸಂಘಟಿತ ಕಾರ್ಮಿಕರಿಂದ ಒಂದು ಬಾರಿ ರೂ.5000/-ಗಳ ನೆರವನ್ನು ಕೋರಿ ಅರ್ಜಿ ಸ್ವೀಕರಿಸಲಾಗಿದ್ದು, ಈವರೆಗೆ 1,19,462 ಒಟ್ಟು ರೂ.59.82 ಕೋಟಿಗಳ ಪರಿಹಾರವನ್ನು ನೀಡಲಾಗಿದೆ. ಕೊಡಗು ಜಿಲ್ಲೆಗೆ ಸಂಬಂಧಿಸಿದಂತೆ 633 ಅಗಸರು |

| | | |
|---|---|---|
| | | ಮತ್ತು ಕ್ಷೌರಿಕರಿಂದ ಅರ್ಜಿಗಳನ್ನು ಸ್ವೀಕರಿಸಲಾಗಿದ್ದು, 577 ಅರ್ಹ ಕಾರ್ಮಿಕರಿಗೆ ಒಟ್ಟು ರೂ.28.85 ಲಕ್ಷ ನೆರವನ್ನು ವಿತರಿಸಲಾಗಿದೆ.<br>➢ ಕೋವಿಡ್-19ರ 2021ನೇ ವರ್ಷದ ಎರಡನೇ ಅಲೆಯ ಲಾಕ್‌ಡೌನ್ ಕಾರಣ ಸಂಕಷ್ಟಕ್ಕೊಳಗಾದ 11 ವರ್ಗಗಳಾದ ಅಸಂಘಟಿತ ಕಾರ್ಮಿಕರಾದ ಅಗಸರು, ಕ್ಷೌರಿಕರು, ಗೃಹಕಾರ್ಮಿಕರು, ಟೈಲರ್‌ಗಳು, ಮೆಕ್ಯಾನಿಕ್, ಚಿಂದಿ ಆಯುವವರು, ಹಮಾಲರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿ ಕಾರ್ಮಿಕರ ವೃತ್ತಿ ನಿರ್ವಹಿಸುತ್ತಿರುವ 18,23,445 ಕಾರ್ಮಿಕರು ರೂ.2,000/-ಗಳ ನೆರವನ್ನು ಕೋರಿ ಅರ್ಜಿಯನ್ನು ಸಲ್ಲಿಸಿದ್ದು, 2,14,731 ಕಾರ್ಮಿಕರಿಗೆ ತಲಾ ರೂ.2,000/-ಗಳಂತೆ ಒಟ್ಟು ರೂ.42.95 ಕೋಟಿಗಳ ನೆರವನ್ನು ಪಾವತಿಸಲಾಗಿದೆ. ಕೊಡಗು ಜಿಲ್ಲೆಗೆ ಸಂಬಂಧಿಸಿದಂತೆ 3,792 ಕಾರ್ಮಿಕರಿಂದ ಅರ್ಜಿಯನ್ನು ಸ್ವೀಕರಿಸಲಾಗಿದ್ದು, 2,544 ಕಾರ್ಮಿಕರಿಗೆ ತಲಾ ರೂ.2,000/-ಗಳಂತೆ ಒಟ್ಟು ರೂ.50.88 ಲಕ್ಷಗಳನ್ನು ವಿತರಿಸಲಾಗಿದೆ.<br>➢ ಉಳಿದ ಕಾರ್ಮಿಕರ ಅರ್ಜಿಗಳನ್ನು ಪರಿಶೀಲಿಸಲಾಗುತ್ತಿದ್ದು, ಪರಿಶೀಲನೆ ನಂತರ ಎಲ್ಲಾ ಅರ್ಹ ಕಾರ್ಮಿಕರಿಗೂ ಪರಿಹಾರ ಧನವನ್ನು ವಿತರಿಸಲಾಗುವುದು. |
| ಆ) | ಜಿಲ್ಲೆಯಲ್ಲಿ, ಸಂಕಷ್ಟದಲ್ಲಿರುವ ಕಾರ್ಮಿಕರಿಗೆ ಇದುವರೆಗೆ ಇಲಾಖೆ ಮೂಲಕ ಒದಗಿಸಲಾಗಿರುವ ಸೌಲಭ್ಯ, ನೆರವು ಹಾಗೂ ಸಹಾಯಗಳ ವಿವರಗಳೇನು; | ಕೊಡಗು ಜಿಲ್ಲೆಯಲ್ಲಿ ಸಂಕಷ್ಟದಲ್ಲಿರುವ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಕೋವಿಡ್ ಒಂದನೇ ಅಲೆಯಲ್ಲಿ 4,000 ಆಹಾರ ಕಿಟ್‌ಗಳನ್ನು ಮತ್ತು ಕೋವಿಡ್-19 ರ ಎರಡನೇ ಅಲೆಯಲ್ಲಿ 6,000 ಸುರಕ್ಷಾ ಕಿಟ್‌ಗಳನ್ನು ವಿತರಿಸಲಾಗಿದೆ.<br>ಕೋವಿಡ್-19ರ ಎರಡನೇ ಅಲೆಯಲ್ಲಿ ಅಸಂಘಟಿತ ಕಾರ್ಮಿಕರಿಗೆ 2000 ಆಹಾರ ಕಿಟ್‌ಗಳನ್ನು ವಿತರಿಸಲಾಗಿದೆ.<br>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ ನೀಡಲಾದ ಇತರೆ ಸೌಲಭ್ಯಗಳು ಈ ಕೆಳಕಂಡಂತಿದೆ.<br>➢ ಕೋವಿಡ್-19 ರಿಂದ ರಕ್ಷಣೆ ಪಡೆಯಲು ಸುರಕ್ಷತಾ ಸಾಮಗ್ರಿಗಳು, ಕಾರ್ಮಿಕರಲ್ಲಿ ಅರಿವು ಮೂಡಿಸಲು ಮತ್ತು ಸಂವಹನ ಚಟುವಟಿಕೆಗಳಿಗಾಗಿ ಕೊಡಗು ಜಿಲ್ಲೆಯು ಸೇರಿದಂತೆ ಎಲ್ಲಾ ಜಿಲ್ಲಾ ಕಾರ್ಮಿಕ ಅಧಿಕಾರಿಗಳಿಗೆ ತಲಾ ರೂ.5 ಲಕ್ಷಗಳಂತೆ 41 ಜಿಲ್ಲಾ ಕಾರ್ಮಿಕ ಅಧಿಕಾರಿಗಳಿಗೆ ಒಟ್ಟು ರೂ.2.05 ಕೋಟಿಗಳನ್ನು ಬಿಡುಗಡೆಗೊಳಿಸಲಾಗಿದೆ. |

| | | |
|---|---|---|
| | | ➢ ಕೊಡಗು ಜಿಲ್ಲೆಯು ಸೇರಿದಂತೆ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಸಂಕಷ್ಟಕ್ಕೊಳಗಾದ ಅಸಂಘಟಿತ ವಲಯಕ್ಕೆ ಸೇರಿದ ಎಲ್ಲಾ ವಲಸೆ ಕಾರ್ಮಿಕರನ್ನು (ಕಟ್ಟಡ ಹಾಗೂ ಇತರೆ ನಿರ್ಮಾಣ ಕಾರ್ಮಿಕರನ್ನು ಹೊರತುಪಡಿಸಿ) ಗುರುತಿಸಿ, ಸಿದ್ದಪಡಿಸಿದ ಆಹಾರ ಹಾಗೂ ಪಡಿತರ ಕಿಟ್ ಅನ್ನು ವಿತರಿಸಲು ತಗಲಿರಬಹುದಾದ ಅಂದಾಜು ವೆಚ್ಚ **ರೂ. 5.00 ಕೋಟಿ** (ಐದು ಕೋಟಿ ರೂಪಾಯಿಗಳು ಮಾತ್ರ)ಗಳನ್ನು ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ವತಿಯಿಂದ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಗೆ ಮರುಪಾವತಿಸಲಾಗಿದೆ. |
| ಇ) | ಜಿಲ್ಲೆಯಲ್ಲಿ, ವಿದ್ಯಾಭ್ಯಾಸ ಮಾಡುತ್ತಿರುವ ಕಾರ್ಮಿಕರ ಮಕ್ಕಳು ಕೋವಿಡ್‌ನಿಂದಾಗಿ ಆರ್ಥಿಕ ಸಂಕಷ್ಟದ ಪರಿಸ್ಥಿತಿಗೆ ಸಿಲುಕಿದ್ದು, ಆ ಮಕ್ಕಳ ನೆರವಿಗಾಗಿ ಇಲಾಖೆ ಏನು ಕ್ರಮ ಕೈಗೊಂಡಿದೆ? | **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ** ಮಂಡಳಿವತಿಯಿಂದ ಕೊಡಗು ಜಿಲ್ಲೆಯಲ್ಲಿ ನೋಂದಾಯಿತ ಫಲಾನುಭವಿಗಳ ಮಕ್ಕಳಿಗೆ ಶೈಕ್ಷಣಿಕ ಸಹಾಯ ಧನ ವಿತರಿಸಿರುವ ವಿವರ ಈ ಕೆಳಗಿನಂತಿದೆ. |

| ವರ್ಷ | ಸಂಖ್ಯೆ | ಶೈಕ್ಷಣಿಕ ಸಹಾಯ ಧನ ನೀಡಿರುವ ಮೊತ್ತ (ರೂ.ಗಳಲ್ಲಿ) |
|---|---|---|
| 2019-20 | 323 | 26,19,000-00 |
| 2020-21 | 266 | 31,98,000-00 |
| 2021-22 | 341 | 41,24,000-00 |

**ಕಾಇ 423 ಎಲ್‌ಇಟಿ 2021**

(ಅರಬೈಲ್ ಶಿವರಾಮ ಹೆಬ್ಬಾರ್)
ಕಾರ್ಮಿಕ ಸಚಿವರು